***********

# ಕೆ.ಎನ್.ಎಮ್, ಎಸ್.ಕೆ.ಎಸ್.ಎಮ್‌ಗಳ ಮೇಲಿನ ಆರೋಪಗಳಿಗೆ ಉತ್ತರ

***********

ಪ್ರಕಾಶಕರು
ಎಸ್.ಕೆ.ಎಸ್.ಎಮ್(ರಿ) ಮಂಗಳೂರು
Darul Khair, Polymar House,
Nellikai Road, Near State Bank,
Mangaluru - 1

بسم الله الرحمن الرحيم

ಕೆ.ಎನ್.ಎಮ್ ಮತ್ತು ಮಡವೂರು ವಿಭಾಗದವರು ಕುರ್‌ಆನ್ ಮತ್ತು ಹದೀಸ್‌ನ ಆಧಾರದಲ್ಲಿ ಐಕ್ಯಗೊಂಡಾಗ ಅದನ್ನು ವಿರೋಧಿಸುವ ಕೆಲವರು ಕೆ.ಎನ್.ಎಮ್, ಎಸ್.ಕೆ.ಎಸ್.ಎಮ್‌ನವರು ಮಡವೂರು ವಿಭಾಗದವರ ವಿಶ್ವಾಸದ ಕಡೆಗೆ ಹೋಗಿ ಹದೀಸ್ ನಿಷೇಧಿಗಳಾಗಿದ್ದಾರೆ ಎಂದು ತಮ್ಮ ಸ್ಟೇಜ್ ಪೇಜ್‌ಗಳಲ್ಲಿ ಸುಳ್ಳಾರೋಪಗಳನ್ನು ಹೊರಿಸಿ ಪರಿಹಾಸ್ಯ ಮಾಡುತ್ತಿದ್ದಾರೆ. ಕೆ.ಎನ್.ಎಮ್, ಮಡವೂರು ವಿಭಾಗ ಮತ್ತು ಎಸ್.ಕೆ.ಎಸ್.ಎಮ್‌ಗಳ ವಿರುದ್ಧ ಮಾಡಲಾಗುವ ಆರೋಪಗಳಲ್ಲಿರುವ ವಿಷಯಗಳನ್ನು ಕುರ್‌ಆನ್ ಮತ್ತು ಸ್ವಹೀಹ್ ಹದೀಸ್‌ನ ಆಧಾರದಲ್ಲಿ ತಮ್ಮ ಮುಂದಿಡುತ್ತೇವೆ.

## ಝಮ್ ಝಮ್ ನೀರು

ಝಮ್ ಝಮ್ ನೀರಿಗೆ ತುಂಬಾ ಶ್ರೇಷ್ಠತೆಗಳು ಸ್ವಹೀಹ್ ಹದೀಸ್‌ಗಳಲ್ಲಿ ವರದಿಯಾಗಿವೆ. ಅವುಗಳಲ್ಲಿ ಯಾವುದನ್ನೂ ನಾವು ನಿಷೇಧಿಸುವುದಿಲ್ಲ. ಆ ವಿಷಯದಲ್ಲಿ ಪ್ರವಾದಿ(ﷺ)ರಿಂದ ವರದಿಯಾದ ಹದೀಸ್‌ಗಳು ಹೀಗಿವೆ:

جَابِرَ بْنَ عَبْدِ اللهِ ، يَقُولُ : سَمِعْتُ رَسُول اللهِ صَلَّى الله عَلَيْهِ وسَلَّمَ يَقُولُ: مَاءُ زَمْزَمَ ، لِمَا شُرِبَ لَهُ. (إبن ماجة ، أحمد

ಜಾಬಿರ್ ಬಿನ್ ಅಬ್ದುಲ್ಲಾಹ್(رضي الله عنه)ರಿಂದ ವರದಿ: ಅವರು ಹೇಳುತ್ತಾರೆ: ಪ್ರವಾದಿ(ﷺ)ರು ಹೇಳುವುದನ್ನು ನಾನು ಆಲಿಸಿದ್ದೇನೆ: "ಝಮ್ ಝಮ್ ನೀರನ್ನು ಯಾವ ಉದ್ದೇಶಕ್ಕಾಗಿ ಕುಡಿಯಲಾಗುತ್ತದೋ ಅದಕ್ಕಾಗಿರುವಂತಹದಾಗಿದೆ."(ಇಬ್ನ್ ಮಾಜಃ, ಅಹ್ಮದ್)

ಒಮ್ಮೆ ಅಬೂದರ್ರ್(رضي الله عنه)ರವರು ಮಕ್ಕಾಕ್ಕೆ ಆಗಮಿಸಿ ಪ್ರವಾದಿ(ﷺ)ರವರನ್ನು ವಿಚಾರಿಸಿದಾಗ ಮುಶ್ರಿಕರು ಅವರಿಗೆ ಹೊಡೆದರು. ಆ ನಂತರ ಪ್ರವಾದಿ(ﷺ) ರವರನ್ನು ಕಣ್ಣಾರೆ ಕಾಣುವವರೆಗೆ ಯಾರಲ್ಲೂ ವಿಚಾರಿಸಲಿಲ್ಲ. ಹಾಗೆ ಅವರು ಪ್ರವಾದಿ(ﷺ)ರವರನ್ನು ಕಾದು ಒಂದು ತಿಂಗಳಕಾಲ ಕಅಬಾದ ಬಳಿಯಲ್ಲಿ ದಿನಗಳೆದರು. ಬಳಿಕ ಪ್ರವಾದಿ(ﷺ)ರವರು ಬಂದಾಗ ಅಬೂದರ್ರ್(رضي الله عنه)ರು ಭೇಟಿಯಾದರು. ಆಗ ಪ್ರವಾದಿ(ﷺ)ರವರು ಕೇಳಿದರು: ನೀನು ಯಾರು ? ಆಗ 'ನಾನು ಗಿಫ್ಫಾರ್ ಗೋತ್ರದಿಂದ ಬಂದವನಾಗಿದ್ದೇನೆ' ಎಂದು ಉತ್ತರಿಸಿದರು. ನೀನು ಇಲ್ಲಿಗೆ ಆಗಮಿಸಿ ಎಷ್ಟು ದಿನಗಳಾದವು ಎಂದು ಪ್ರವಾದಿ(ﷺ)ರವರು ಪ್ರಶ್ನಿಸಿದಾಗ ಅವರು ಹೇಳಿದರು: 30 ದಿನ ರಾತ್ರಿಗಳಾದವು. ಇಷ್ಟು ದಿನ ನಿನಗೆ ಆಹಾರ ನೀಡಿದವರು ಯಾರು ಎಂದು ಪ್ರವಾದಿ(ﷺ)ರವರು ಪ್ರಶ್ನಿಸಿದಾಗ ಅಬೂ ದರ್ರ್(رضي الله عنه)ರು ಹೀಗೆಂದರು: ಅಷ್ಟು ದಿನಗಳಲ್ಲಿ ನನ್ನ ಆಹಾರ ಝಮ್ ಝಮ್ ನೀರಲ್ಲದೆ

ಬೇರೇನೂ ಆಗಿರಲಿಲ್ಲ. ಆಗ ಪ್ರವಾದಿ(ﷺ)ರವರು ಹೇಳಿದರು:
(إِنَّهَا مُبَارَكَةٌ إِنَّهَا طَعَامُ طُعْمٍ) ಝಮ್ ಝಮ್ ನೀರು ಅನುಗ್ರಹೀತವಾದುದಾಗಿದೆ. ಅದರಲ್ಲಿ ರುಚಿಕರವಾದ ಆಹಾರ ಕೂಡ ಇದೆ."(ಮುಸ್ಲಿಂ)

ಇಕ್ರಿಮಾ(رضي الله عنه)ರಿಂದ ವರದಿ: ಇಬ್ನ್ ಅಬ್ಬಾಸ್(رضي الله عنه)ರವರು ಝಮ್‌ಝಮ್ ನೀರನ್ನು ಕುಡಿದ ನಂತರ ಹೀಗೆ ಪ್ರಾರ್ಥಿಸುತ್ತಿದ್ದರು:

(اللَّهُمَّ إِنِّي أَسْأَلُكَ عِلْمًا نَافِعًا وَرِزْقًا وَاسِعًا وَشِفَاءً مِنْ كُلِّ دَاءٍ)

(ಅಲ್ಲಾಹುಮ್ಮ ಇನ್ನೀ ಅಸ್‌ಅಲುಕ ಇಲ್ಮನ್ ನಾಫಿಅನ್, ವರಿಝ್‌ಖನ್ ವಾಸಿಅನ್, ವಶಿಫಾಅನ್ ಮಿನ್ ಕುಲ್ಲಿ ದಾಇ) ಅರ್ಥ: ಅಲ್ಲಾಹನೇ, ಉಪಕಾರಪ್ರದವಾದ ಜ್ಞಾನವನ್ನು, ವಿಪುಲವಾದ ರಿಝ್‌ಖನ್ನು, ಸಕಲ ರೋಗಗಳಿಂದ ಶಮನವನ್ನು ನಾನು ನಿನ್ನೊಂದಿಗೆ ಬೇಡುತ್ತೇನೆ."(ಸುನನ್ ದಾರಕುತ್ನಿ, ಮುಸನ್ನಫ್ ಅಬ್ದುರ್ರಝ್ಝಾಖ್)

ಝಮ್ ಝಮ್ ನೀರು ಇಸ್ಮಾಈಲ್(عليه السلام)ರವರ ಕಾಲಹೊಡೆತದಿಂದ ಚಿಮ್ಮಿ ಹೊರಟಿದೆಯೆಂಬುದು ಕೆಲವರ ವಿಶ್ವಾಸ. ಆದರೆ ವಾಸ್ತವಾಂಶ ಏನೆಂದರೆ ಇಸ್ಮಾಈಲ್(عليه السلام)ರವರ ಕಾಲಹೊಡೆತದ ಸ್ಥಳದ ಮೇಲೆ ಜಿಬ್ರೀಲ್(عليه السلام)ರು ತಮ್ಮ ರೆಕ್ಕೆಯಿಂದ ಹೊಡೆದಾಗ ಅಲ್ಲಿ ಝಮ್ ಝಮ್ ನೀರು ಚಿಮ್ಮಿತು. ಆದ್ದರಿಂದ ಝಮ್ ಝಮ್ ನೀರಿಗೆ ರಕ್‌ದತ್ ಜಿಬ್ರೀಲ್ ركضة جبريل ಎಂಬ ಹೆಸರು ಕೂಡ ಇಸ್ಲಾಮೀ ಇತಿಹಾಸ ಗ್ರಂಥಗಳಲ್ಲಿ ಉಲ್ಲೇಖಿಸಲ್ಪಟ್ಟಿದೆ.

## ಕಬ್ರ್ ಶಿಕ್ಷೆ ಮತ್ತು ದಜ್ಜಾಲ್

ಪ್ರತೀ ನಮಾಝ್‌ನ ಅತ್ತಹಿಯ್ಯಾತ್‌ನಲ್ಲಿ ಕಬ್ರ್ ಶಿಕ್ಷೆ ಮತ್ತು ದಜ್ಜಾಲ್‌ನ ವಿಪತ್ತಿನಿಂದ ರಕ್ಷೆ ಕೋರಬೇಕೆಂದು ನಾವು ಸರ್ವಸಾಮಾನ್ಯವಾಗಿ ಕಲಿಸುತ್ತಿದ್ದೇವೆ. ಎಸ್.ಕೆ.ಎಸ್.ಎಮ್‌ನ ಅಧೀನದಲ್ಲಿರುವ ಮದ್ರಸಗಳಲ್ಲಿ ಕಲಿಸಲಾಗುವ ಪಠ್ಯ ಪುಸ್ತಕಗಳಲ್ಲಿ ಈ ವಿಷಯ ಹಿಂದಿನಿಂದಲೇ ಕಲಿಸುತ್ತಾ ಬಂದಿದ್ದೇವೆ. ಐಕ್ಯದ ಬಳಿಕವೂ ಅದರಲ್ಲಿ ಯಾವುದೇ ಬದಲಾವಣೆ ಮಾಡಲಿಲ್ಲ. ಏಕೆಂದರೆ ಅದು ಕುರ್‌ಆನ್ ಮತ್ತು ಸುನ್ನತ್‌ನಲ್ಲಿ ಸ್ಥಿರಪಟ್ಟವುಗಳಾಗಿವೆ. ನಮ್ಮ ಐಕ್ಯವೂ ಕುರ್‌ಆನ್ ಮತ್ತು ಸುನ್ನತ್‌ನ ಆಧಾರಿತವಾಗಿದೆ. ಸಕಲ ಪ್ರವಾದಿಗಳು ತಮ್ಮ ಜನಾಂಗಕ್ಕೆ ಮಸೀಹುದ್ದಜ್ಜಾಲನ ವಿಪತ್ತಿನ ಬಗ್ಗೆ ಮುನ್ನೆಚ್ಚರಿಕೆ ನೀಡಿದ್ದರು ಎಂಬುದು ಸ್ವಹೀಹ್ ಹದೀಸ್‌ನಲ್ಲಿ ದೃಢಪಟ್ಟಿದೆ. ಆದ್ದರಿಂದ ಇವುಗಳಲ್ಲಿ ಯಾವುದನ್ನೂ ನಾವು ತಿರಸ್ಕರಿಸದೆ ಒಪ್ಪುತ್ತೇವೆ. ನಮಾಝ್‌ನಲ್ಲಿ ಪ್ರಾರ್ಥಿಸಲಾಗುವ ಎರಡು ಪ್ರಾರ್ಥನೆಗಳನ್ನು ಈ ಕೆಳಗೆ ಕೊಡಲಾಗಿದೆ.

ಪ್ರವಾದಿ ಪತ್ನಿ ಆಯಿಶಾ(رضي الله عنها)ರವರಿಂದ ವರದಿ: ಪ್ರವಾದಿ(ﷺ)ರವರು ನಮಾಝಿ ನಲ್ಲಿ ಈ ರೀತಿ ಪ್ರಾರ್ಥಿಸುತ್ತಿದ್ದರು:

اللَّهُمَّ إِنِّي أَعُوذُ بِكَ مِنْ عَذَابِ الْقَبْرِ وَأَعُوذُ بِكَ مِنْ فِتْنَةِ الْمَسِيحِ الدَّجَّالِ

"ಅಲ್ಲಾಹನೇ, ಕಬ್ರ್ ಶಿಕ್ಷೆಯಿಂದ ಮತ್ತು ಮಸೀಹುದ್ದಜ್ಜಾಲನ ಕೇಡಿನಿಂದ

ನಾನು ನಿನ್ನಲ್ಲಿ ರಕ್ಷಣೆ ಕೋರುತ್ತೇನೆ."(ಬುಖಾರಿ, ಮುಸ್ಲಿಂ)

ಅಬೂಹುರೈರ(ﷺ)ರವರಿಂದ ವರದಿ: ಪ್ರವಾದಿ(ﷺ)ರವರು ಹೀಗೆ ಪ್ರಾರ್ಥಿಸುತ್ತಿದ್ದರು:

اللَّهُمَّ إِنِّي أَعُوذُ بِكَ مِنْ عَذَابِ الْقَبْرِ وَمِنْ عَذَابِ النَّارِ وَمِنْ فِتْنَةِ الْمَحْيَا وَالْمَمَاتِ وَمِنْ فِتْنَةِ الْمَسِيحِ الدَّجَّالِ.

"ಅಲ್ಲಾಹನೇ, ಕಬ್ರ್ ಶಿಕ್ಷೆಯಿಂದ, ನರಕದ ಯಾತನೆಯಿಂದ, ಜೀವನ–ಮರಣ ಮತ್ತು ಮಸೀಹುದ್ದಜ್ಜಾಲ್‌ನ ಕೇಡಿನಿಂದ ನಾನು ನಿನ್ನೊಂದಿಗೆ ರಕ್ಷಣೆ ಕೋರುತ್ತೇನೆ."(ಬುಖಾರಿ)

## ಕಣ್ಣು ದೃಷ್ಟಿ

ಕಣ್ಣು ದೃಷ್ಟಿಯ ವಿಷಯದಲ್ಲಿ ಪ್ರಮಾಣಗಳಲ್ಲಿ ಏನಿದೆಯೋ ಅದರಲ್ಲಿ ಏನನ್ನೂ ನಿಷೇಧಿಸದೆ ಅವುಗಳ ಮೇಲೆ ವಿಶ್ವಾಸವಿಡುತ್ತೇವೆ. ಕಣ್ಣು ದೃಷ್ಟಿಯ ವಿಷಯದಲ್ಲಿ ಸ್ವಹೀಹ್ ಹದೀಸ್‌ನಲ್ಲಿ ಬಂದಿರುವ ಅಭಿಪ್ರಾಯವೇ ನಮ್ಮ ವಿಶ್ವಾಸ. ಆ ಹದೀಸ್ ಹೀಗಿದೆ: ಅಬೂಹುರೈರ(ﷺ)ರವರಿಂದ ವರದಿ: ಪ್ರವಾದಿ(ﷺ)ರವರು ಹೇಳಿದರು: الْعَيْنُ حَقٌّ ಅರ್ಥ: "ಕಣ್ಣು ದೃಷ್ಟಿ ಸತ್ಯವಾಗಿದೆ."(ಬುಖಾರಿ, ಮುಸ್ಲಿಂ)

ಪ್ರವಾದಿ(ﷺ)ರವರು ತಮ್ಮೆರಡು ಮೊಮ್ಮಕ್ಕಳಿಗಾಗಿ ಅಭಯ ಯಾಚಿಸುತ್ತಿದ್ದ ಪ್ರಾರ್ಥನೆ ಹೀಗಿದೆ:

ಇಬ್ನ್‌ಅಬ್ಬಾಸ್(ﷺ)ರವರಿಂದ ವರದಿ: ಪ್ರವಾದಿ(ﷺ)ರವರು ಹಸನ್(ﷺ) ಮತ್ತು ಹುಸೈನ್(ﷺ)ರವರಿಗೆ ಅಭಯ ಯಾಚಿಸುತ್ತಾ ಹೇಳಿದರು: ನಿಮ್ಮ ಪಿತರಾದ(ಇಬ್ರಾಹೀಮ್(ﷺ)ರವರು ಅವರ ಮಕ್ಕಳಾದ ಇಸ್ಮಾಈಲ್(ﷺ) ಮತ್ತು ಇಸ್ಹಾಕ್(ﷺ)ರವರಿಗಾಗಿ ಅಭಯ ಯಾಚಿಸುತ್ತಿದ್ದ ಪ್ರಾರ್ಥನೆ:

(أَعُوذُ بِكَلِمَاتِ اللهِ التَّامَّةِ مِنْ كُلِّ شَيْطَانٍ وَهَامَّةٍ وَمِنْ كُلِّ عَيْنٍ لاَمَّةٍ)

ಅರ್ಥ: ಸಕಲ ಶೈತಾನರಿಂದ, ವಿಷಜಂತುಗಳಿಂದ, ಕೇಡನ್ನುಂಟು ಮಾಡುವ ಸೃಷ್ಟಿಗಳಿಂದ ಹಾಗೂ ಸರ್ವ ರೀತಿಯ ಆಕ್ಷೇಪಕಾರಿ ದೃಷ್ಟಿಗಳಿಂದ ಅಲ್ಲಾಹನ ಪೂರ್ಣ ವಚನಗಳೊಂದಿಗೆ ನಾನು ರಕ್ಷಣೆ ಕೋರುತ್ತೇನೆ."(ಬುಖಾರಿ: 3191)

ಆದರೆ ಕಣ್ಣು ದೃಷ್ಟಿ ಬೀಳುವುದನ್ನು ತಡೆಗಟ್ಟಲಿಕ್ಕಾಗಿ ಮಣ್ಣಿನ ಪಾತ್ರೆ, ಚಪ್ಪಲಿ, ಮನುಷ್ಯ ರೂಪ ಇತ್ಯಾದಿಗಳನ್ನು ನಿರ್ಮಾಣ ಹಂತದಲ್ಲಿರುವ ಕಟ್ಟಡಗಳ ಮೇಲೆ, ಕೃಷಿ ಸ್ಥಳಗಳಲ್ಲಿ ಹಾಗೂ ಇತರ ಸ್ಥಳಗಳಲ್ಲಿ ಇಡುವುದು ಪ್ರಮಾಣಗಳಿಗೆ ವಿರುದ್ಧವಾಗಿರುವುದರಿಂದ ಅವುಗಳನ್ನು ನಾವು ಪೂರ್ಣವಾಗಿ ವಿರೋಧಿಸುತ್ತೇವೆ.

## ಸಿಹ್ರ್

ಸಿಹ್ರ್‌ನ ವಿಷಯದಲ್ಲಿ ಕುರ್‌ಆನ್ ಮತ್ತು ಹದೀಸ್‌ನಲ್ಲಿ ಏನಿದೆಯೋ ಅದನ್ನು ನಿಷೇಧಿಸದೆ ಅವುಗಳ ಮೇಲೆ ಅದೇ ಪ್ರಕಾರ ನಾವು ವಿಶ್ವಾಸವಿಡುತ್ತೇವೆ.

ಯಾವುದನ್ನೂ ನಾವು ತಿರಸ್ಕರಿಸುವುದಿಲ್ಲ. ಮೇಲೆ ಹೇಳಲಾದ ವಿಷಯಗಳಲ್ಲಿ ಮತ್ತು ಸಿಹ್ರ್‌ನ ವಿಷಯದಲ್ಲಿ ಯಾರದೇ ವೈಯುಕ್ತಿಕ ಅಭಿಪ್ರಾಯದೊಂದಿಗೆ ಸಂಘಟನೆಗೆ ಯಾವುದೇ ಸಂಬಂಧವಿಲ್ಲ. ಅಂತಹವರು ಯಾವುದಾದರೂ ಸಂಘಟನೆಯಲ್ಲಿದ್ದರೆ ಆ ಸಂಘಟನೆಯನ್ನೇ ಹದೀಸ್ ನಿಷೇಧಿಗಳೆಂದು ನಿಂದಿಸುವುದು ನ್ಯಾಯವೇ ? ಪೂರ್ವಿಕರಾದ ಕೆಲವು ಉಲೆಮಾಗಳಿಗೆ ಕೆಲವು ವಿಷಯದಲ್ಲಿ ವೈಯುಕ್ತಿಕ ಅಭಿಪ್ರಾಯಗಳಿದ್ದವು. ಹಾಗೆಂದು ಆ ಉಲೆಮಾಗಳನ್ನು ಹದೀಸ್ ನಿಷೇಧಿಗಳೆಂದು ಹೇಳಬಹುದೇ ?

ಇನ್ನು ಪ್ರವಾದಿ(ﷺ)ರವರಿಗೆ ಸಿಹ್ರ್ ಮಾಡಲ್ಪಟ್ಟ ವಿಷಯದಲ್ಲಿ ಸ್ವಹೀಹ್ ಹದೀಸ್‌ನಲ್ಲಿ ಏನನ್ನು ವರದಿ ಮಾಡಲ್ಪಟ್ಟಿದೆಯೋ ಅದನ್ನು ತಿರಸ್ಕರಿಸಿದೆ ಅದೇ ರೀತಿಯಲ್ಲಿ ನಂಬುತ್ತೇವೆ. ಆದರೆ ನಮ್ಮ ಪ್ರಬೋಧನಾ ವಿಷಯ ಜಿನ್ನ್, ಸಿಹ್ರ್ (ಮಾಟ), ಕಣ್ಣಿ ದೃಷ್ಟಿ ಮುಂತಾದವುಗಳಾಗಿರದೆ ತೌಹೀದ್ ಆಗಿದೆ. ಪ್ರವಾದಿ(ﷺ) ರವರು ಮತ್ತು ಸ್ವಹಾಬಿಗಳು ಜಿನ್ನ್, ಸಿಹ್ರ್(ಮಾಟ) ಮತ್ತು ಕಣ್ಣಿ ದೃಷ್ಟಿಗಳನ್ನು ಪ್ರಬೊಧನಾ ವಿಷಯಗಳನ್ನಾಗಿ ಮಾಡದೆ ತೌಹೀದನ್ನು ಪ್ರಬೋಧನಾ ವಿಷಯವನ್ನಾಗಿ ಮಾಡಿದ್ದರು. ಆದ್ದರಿಂದ ನಮ್ಮ ಸಮುದಾಯವು ಶಿರ್ಕ್‌ನಲ್ಲಿ ಮುಳುಗಿ ನರಕದ ದಡಕ್ಕೆ ಸಾಗುತ್ತಿರುವಾಗ ಅವರಿಗೆ ತೌಹೀದನ್ನು ಕಲಿಸಿಕೊಟ್ಟು ಅವರನ್ನು ಸ್ವರ್ಗದ ದಡಕ್ಕೆ ಸಾಗಿಸುವ ದಅ್‌ವಾ ಚಟುವಟಿಕೆಯಲ್ಲೇರ್ಪಡುವುದು ನಮ್ಮ ಕರ್ತವ್ಯವಾಗಿದೆ.

ಸಿಹ್ರ್‌ನ ಕುರಿತು ಅಲ್ಲಾಹನು ಕುರ್‌ಆನ್‌ನಲ್ಲಿ ಹೇಳುತ್ತಾನೆ:

وَمَا كَفَرَ سُلَيْمَانُ وَلَـٰكِنَّ الشَّيَاطِينَ كَفَرُوا يُعَلِّمُونَ النَّاسَ

السِّحْرَ– البقرة: 102

“ಸುಲೈಮಾನರು ಸತ್ಯನಿಷೇಧ ಕೈಗೊಂಡಿರಲಿಲ್ಲ. ಆದರೆ ಜನರಿಗೆ ಮಾಂತ್ರಿಕ ವಿದ್ಯೆ ಕಲಿಸಿಕೊಡುತ್ತಿದ್ದ ಶೈತಾನರು ಸತ್ಯನಿಷೇಧ ಕೈಗೊಂಡರು...”(ಅಲ್ ಬಕರಃ 102)

ಸಿಹ್ರ್‌ನ ಕುರಿತು ಹದೀಸ್‌ನಲ್ಲಿ:

عَنْ أَبِي هُرَيْرَةَ ، رَضِيَ اللَّهُ عَنْهُ، عَنِ النَّبِيِّ صلى الله عليه وسلم قَالَ : اجْتَنِبُوا السَّبْعَ

الْمُوبِقَاتِ قَالُوا : يَا رَسُولَ اللهِ وَمَا هُنَّ قَالَ الشِّرْكُ بِاللَّهِ وَالسِّحْرُ – بخاري ، مسلم

ಅಬೂಹುರೈರ(رضي الله عنه)ರಿಂದ ವರದಿ: ಪ್ರವಾದಿ(ﷺ)ರವರು ಹೇಳಿದರು: ಏಳು ಮಹಾಪಾಪಗಳನ್ನು ತ್ಯಜಿಸಿರಿ. ಆಗ ಸ್ವಹಾಬಿಗಳು ಅವು ಯಾವುವು ಎಂದು ಪ್ರವಾದಿ(ﷺ)ರೊಡನೆ ಕೇಳಿದರು: ಆಗ ಅವರು ಹೇಳಿದರು: 1. ಅಲ್ಲಾಹನಿಗೆ ಇತರರನ್ನು ಸಹಭಾಗಿಗಳನ್ನಾಗಿ ಮಾಡುವುದು, 2. ಸಿಹ್ರ್..... (ಬುಖಾರಿ, ಮುಸ್ಲಿಂ)

ಇನ್ನೊಂದು ಹದೀಸ್‌ನಲ್ಲಿ ಹೀಗಿದೆ:

عَنْ زَيْنَبَ امْرَأَةِ عَبْدِ اللَّهِ عَنْ عَبْدِ اللَّهِ قَالَ سَمِعْتُ رَسُولَ اللَّهِ –صلى الله عليه

وسلم– يقُولُ إِنَّ الرُّقَى وَالتَّمَائِمَ وَالتِّوَلَةَ شِرْكٌ – أبو داود
ಝೈನಬ(ﵥ) ತನ್ನ ಪತಿ ಅಬ್ದುಲ್ಲಾಹ್(﵁)ರಿಂದ ವರದಿ ಮಾಡುತ್ತಾರೆ: ನಾನು ಪ್ರವಾದಿ(ﷺ)ರವರು ಹೇಳುವುದನ್ನು ಆಲಿಸಿದ್ದೇನೆ. ಖಂಡಿತ ಅರ್ರುಖಾ (ರುಖ್‌ಯಾ, ಶಿರ್ಕ್ ಇರುವ ನಿಷಿದ್ದವಾದ ಮಂತ್ರಗಳು), ತಮಾಇಂ(ತಮೀಮ, ತಾಯಿತ–ತಾವೀಝ್‌ಗಳು), ತಿವಲಃ(ಸಿಹ್ರ್‌ಗಳು) ಶಿರ್ಕಾಗಿದೆ.(ಅಬೂದಾವೂದ್, ಇಬ್ನ್ ಹಿಬ್ಬಾನ್)

ಆದರೆ ಸಿಹ್ರ್(ಮಾಟ) ಮಾಡುವುದು ಕುಫ್ರ್ ಮತ್ತು ನಿಷಿದ್ಧವಾಗಿದೆ. ಸಿಹ್ರ್ ಮಾಡುವವರನ್ನು ಇಸ್ಲಾಮೀ ಸರಕಾರವು ಕಠಿಣ ಶಿಕ್ಷೆಗೊಳಪಡಿಸಿರುವುದಾಗಿ ಇಸ್ಲಾಮೀ ಇತಿಹಾಸ ಗ್ರಂಥಗಳಲ್ಲಿ ಕಾಣಬಹುದು.

عَنْ عَمْرِو بْنِ دِينَارٍ أَنَّهُ سَمِعَ بَجَالَةَ يقُولُ : كَتَبَ عُمَرُ رَضِىَ اللَّهُ عَنْهُ أَنِ اقتُلُوا كُلَّ سَاحِرٍ وَسَاحِرَةٍ قَالَ : فَقَتَلْنَا ثَلاَثَ سَوَاحِرَ

ಅಮ್ರ್ ಬಿನ್ ದೀನಾರರು ಬಜಾಲಃ(﵁)ರು ಹೀಗೆ ಹೇಳುವುದನ್ನು ಆಲಿಸಿದರು: ಸಕಲ ಸಾಹಿರ್‌ಗಳನ್ನು (ಮಾಟಗಾರ ಮತ್ತು ಮಾಟಗಾತಿಯರನ್ನು) ವಧಿಸಲಿಕ್ಕಾಗಿ ಉಮರ್(﵁)ರವರು (ರಾಜ್ಯಪಾಲರಿಗೆ) ಪತ್ರ ಬರೆದರು. ಹಾಗೆ ನಾವು ಮೂರು ಮಾಟಗಾರರನ್ನು ವಧಿಸಿದೆವು."(ಅಹ್ಮದ್, ಅಬೂದಾವೂದ್, ಅಲ್ಬಾನಿ ಸ್ವಹೀಹ್‌ಎಂದಿದ್ದಾರೆ)
ಹಫ್ಸ(ﵥ)ರಿಂದ ವರದಿ:

(عَنْ حَفْصَةَ أَنَّهَا أَمَرَتْ بِقَتْلِ جَارِيَةٍ لَهَا سَحَرَتْهَا فقُتِلَتْ)

ಹಫ್ಸ(ﵥ)ರವರಿಗೆ ಸಿಹ್ರ್ ಮಾಡಿದ ಅವರ ಓರ್ವ ದಾಸಿಯನ್ನು ವಧಿಸಲು ಅವರು (ಆಡಳಿತಾಧಿಕಾರಿಗೆ) ಆದೇಶಿಸಿದರು. ಹಾಗೆ ಅವಳು (ಸಿಹ್ರ್ ಮಾಡುತ್ತಿದ್ದವಳು) ವಧಿಸಲ್ಪಟ್ಟಳು."(ಮಾಲಿಕ್, ಬಲಾಗನ್: 1624, ಬೈಹಕಿ ಮೌಸೂಲನ್: 8/136)

ಆದರೆ ಸಿಹ್ರ್‌ನ ವಿಷಯದಲ್ಲಿ ಪ್ರವಾದಿ(ﷺ)ರವರಿಂದ ವರದಿಯಾದ ಹದೀಸ್ ಗಳನ್ನು ಮುಂದಿಟ್ಟು ಸಿಹ್ರ್(ಮಾಟ) ಬಾತಿಲ್ ಮಾಡುತ್ತೇವೆಂದು ಹೇಳಿ ಹಣ ಸಂಪಾದಿಸುವ ಧರ್ಮಭ್ರಷ್ಟ ಮಂತ್ರವಾದಿಗಳನ್ನು ನಾವು ವಿರೋಧಿಸುತ್ತೇವೆ.

## ಸಿರಾತ್ ಸೇತುವೆ

ಪರಲೋಕದಲ್ಲಿ ನರಕದ ಮೇಲೆ ನಿರ್ಮಿಸಲ್ಪಟ್ಟ ಸಿರಾತ್ ಸೇತುವೆ ದಾಟಿಕೊಂಡೇ ಸ್ವರ್ಗಕ್ಕೆ ಪ್ರವೇಶಿಸಬೇಕೆಂದು ಪ್ರಮಾಣಗಳಲ್ಲಿ ಸ್ವಹೀಹ್ ಆಗಿ ಬಂದ ಪ್ರತಿಯೊಂದು ವಿಷಯದ ಮೇಲೆ ನಾವು ವಿಶ್ವಾಸವಿಡುತ್ತೇವೆ. ಅದರಲ್ಲಿ ಯಾವುದನ್ನೂ ತಿರಸ್ಕರಿಸುವುದಿಲ್ಲ. ಸಿರಾತ್ ಸೇತುವೆಯ ಕುರಿತು ವರದಿಯಾದ ಹದೀಸ್ ಹೀಗಿದೆ:

عَنْ عَائِشَةَ ، قَالَتْ : قُلْتُ : يَا رَسُولَ اللهِ ، هَلْ يَذْكُرُ الْحَبِيبُ حَبِيبَهُ يَوْمَ الْقِيَامَةِ ؟
قَالَ : يَا عَائِشَةُ ، أَمَّا عِنْدَ ثَلاَثٍ فَلاَ ، أَمَّا عِنْدَ الْمِيزَانِ حَتَّى يَثْقُلَ ، أَوْ يَخِفَّ ، فَلاَ

، وَأَمَّا عِنْدَ تَطَايُرِ الْكُتُبِ ، فَإِمَّا أَنْ يُعْطَى بِيَمِينِهِ ، أَوْ يُعْطَى بِشِمَالِهِ..... وَلِجَهَنَّمَ جِسْرٌ أَدَقُّ مِنَ الشَّعْرِ ، وَأَحَدُّ مِنَ السَّيْفِ ، عَلَيْهِ كَلَالِيبُ وَحَسَكٌ يَأْخُذُونَ مَنْ شَاءَ اللَّهُ ، وَالنَّاسُ عَلَيْهِ كَالطَّرْفِ ، وَكَالْبَرْقِ ، وَكَالرِّيحِ ، وَكَأَجَاوِيدِ الْخَيْلِ ، وَالرِّكَابِ ، وَالْمَلَائِكَةُ يَقُولُونَ : رَبِّ سَلِّمْ ، رَبِّ سَلِّمْ ، فَنَاجٍ مُسَلَّمٌ ، وَمَخْدُوشٌ مُسَلَّمٌ ، وَمُكَوَّرٌ فِي النَّارِ عَلَى وَجْهِه - أحمد

ಅರ್ಥ: ಆಯಿಶಾ(ﷺ)ರಿಂದ ವರದಿ: "ಅವರು ಪ್ರವಾದಿ(ﷺ)ರವರಲ್ಲಿ ಕೇಳಿದರು: ಪ್ರವಾದಿಯವರೇ, ಅಂತ್ಯದಿನದಂದು ಗೆಳೆಯರಿಗೆ ಗೆಳೆಯರ ನೆನಪಿರಬಹುದೇ ? ಆಗ ಪ್ರವಾದಿ(ﷺ)ರವರು ಹೇಳಿದರು: ಓ ಆಯಿಶಾ ಮೂರು ಸಂದರ್ಭಗಳಲ್ಲಿ ಯಾರಿಗೂ ಯಾರದೇ ನೆನಪಿರದು. ಮೀಝಾನ್‌ನಲ್ಲಿ ತಮ್ಮ ಕರ್ಮಗಳನ್ನು ತೂಗುವಾಗ, ಬಲ ಅಥವಾ ಎಡಗೈಯಲ್ಲಿ ತಮ್ಮ ಗ್ರಂಥವನ್ನು ಕೊಡುವಾಗ ಮತ್ತು ವಿಚಾರಣೆ ಮಾಡುಲಾಗುವಾಗ..... ನರಕಕ್ಕೆ ಸೇತುವೆ ಇದೆ. ಅದು ಕೂದಲಿಗಿಂತ ತೆಳು ಮತ್ತು ಖಡ್ಗಕ್ಕಿಂತ ಹರಿತವಾಗಿದೆ. ಅದರ ಮೇಲೆ ಕೊಂಡಿಗಳು ಮತ್ತು ಮುಳ್ಳುಗಳಿವೆ. ಅಲ್ಲಾಹನು ಇಚ್ಛಿಸುವವರನ್ನು ಅದು ಎಳೆಯುತ್ತದೆ. ಜನರು ಅದರ ಮೇಲಿಂದ ಕಣ್ಣು ಮಿಟುಕಿಸುವ ವೇಗದಲ್ಲಿ, ಮಿಂಚಿನ ವೇಗದಲ್ಲಿ, ಗಾಳಿಯ ವೇಗದಲ್ಲಿ, ಕುದುರೆ ಓಡುವ ವೇಗದಲ್ಲಿ ಮತ್ತು ಪ್ರಯಾಣಿಕನ ವೇಗದಲ್ಲಿ ದಾಟುವರು. ಆಗ ಮಲಕ್‌ಗಳು ಹೇಳುವರು: ಪ್ರಭೂ ರಕ್ಷಿಸು, ಪ್ರಭೂ ರಕ್ಷಿಸು, ಪ್ರಭೂ ರಕ್ಷಿಸು. ರಕ್ಷಣೆ ಹೊಂದಿದವರು ಯಶಸ್ಸುಗೊಂಡರು...."(ಅಹ್ಮದ್)

## ಮೀಝಾನ್

ಪರಲೋಕದಲ್ಲಿ ನಮ್ಮ ಒಳಿತು ಮತ್ತು ಕೆಡುಕನ್ನು ತೂಗುವ ಮೀಝಾನ್‌ನ (ತಕ್ಕಡಿಯ) ಕುರಿತು ಕುರ್‌ಆನ್ ಮತ್ತು ಸ್ವಹೀಹ್ ಹದೀಸ್‌ನಲ್ಲಿ ಏನು ವರದಿಯಾಗಿದೆಯೋ ಅದುವೇ ನಮ್ಮ ವಿಶ್ವಾಸ. ಮೀಝಾನ್ ಕುರಿತು ಅಲ್ಲಾಹನು ಕುರ್‌ಆನ್‌ನಲ್ಲಿ ಹೇಳುತ್ತಾನೆ:

وَٱلْوَزْنُ يَوْمَئِذٍ ٱلْحَقُّ ۚ فَمَن ثَقُلَتْ مَوَٰزِينُهُۥ فَأُو۟لَـٰٓئِكَ هُمُ ٱلْمُفْلِحُونَ ﴿٨﴾ وَمَنْ خَفَّتْ مَوَٰزِينُهُۥ فَأُو۟لَـٰٓئِكَ ٱلَّذِينَ خَسِرُوٓا۟ أَنفُسَهُم بِمَا كَانُوا۟ بِـَٔايَـٰتِنَا يَظْلِمُونَ ﴿٩﴾

"ಅಂದು (ಕರ್ಮಗಳನ್ನು) ತೂಗುವುದು ಸತ್ಯವಾಗಿರುತ್ತದೆ. ಆಗ ಯಾರ (ಒಳಿತುಗಳ) ತೂಕವು (ಹೆಚ್ಚು) ಭಾರವಾಗಿರುವುದೋ ಅವರೇ ವಿಜಯಿಗಳು. ಮತ್ತು ಯಾರ ತೂಕಗಳು ಹಗುರವಾಗಿರುವುದೋ ಅವರೇ ತಮ್ಮನ್ನು ತಾವೇ

ನಷ್ಟಕ್ಕೊಳಪಡಿಸಿಕೊಂಡವರು. ಏಕೆಂದರೆ ಅವರು ನಮ್ಮ ನಿದರ್ಶನಗಳೊಂದಿಗೆ ಅಕ್ರಮವೆಸಗಿಕೊಂಡರು."(ಅಲ್ ಅಲ್‌ರಾಫ್: 8, 9)

## ಚಂದ್ರನು ಹೋಳಾಗಿರುವುದು

ಇತರ ವಿಷಯಗಳಂತೆ ಈ ವಿಷಯದಲ್ಲೂ ಅಲ್ಲಾಹನ ಪ್ರವಾದಿ(ﷺ)ರವರ ಮುಅ್‌ಜಿಝತ್ ಆಗಿ ಚಂದ್ರನು ಹೋಳಾಗಿದ್ದನು ಎಂಬುದೇ ನಮ್ಮ ದೃಢವಿಶ್ವಾಸ. ಅಲ್ಲಾಹನು ಹೇಳುತ್ತಾನೆ:

ٱقۡتَرَبَتِ ٱلسَّاعَةُ وَٱنشَقَّ ٱلۡقَمَرُ ۝١

"ಅಂತ್ಯ ಸಮಯವು ಸಮೀಪಿಸಿದೆ ಮತ್ತು ಚಂದ್ರನು ಹೋಳಾದನು." (ಅಲ್ ಖಮರ್: 1)

"ಮುಹಮ್ಮದ್(ﷺ)ರವರ ಪ್ರವಾದಿತ್ವದಲ್ಲಿ ನಂಬಿಕೆಯಿಡಬೇಕಾದರೆ ಸ್ಪಷ್ಟವಾದ ನಿದರ್ಶನವೇನಾದರೂ ಕಾಣಬೇಕೆಂದು ಮಕ್ಕಾದ ಸತ್ಯನಿಷೇಧಿಗಳು ಹಠಗಟ್ಟಿದಾಗ ಚಂದ್ರನು ಹೋಳಾದನೆಂದೂ ಮಕ್ಕಾ ನಿವಾಸಿಗಳೆಲ್ಲರೂ ಅದನ್ನು ಪ್ರತ್ಯಕ್ಷವಾಗಿ ಕಂಡರೆಂದೂ ಬುಖಾರಿ, ಮುಸ್ಲಿಂ ಮತ್ತಿತರರು ವರದಿ ಮಾಡಿದ ಹದೀಸ್‌ಗಳಲ್ಲಿ ಕಾಣಬಹುದಾಗಿದೆ."(ಎಸ್.ಕೆ.ಎಸ್.ಎಮ್ ಪ್ರಕಟಿತ ಕುರ್‌ಆನ್ ಕನ್ನಡ ಅರ್ಥ ಮತ್ತು ವಿವರಣೆ, ಪುಟ: 834)

ಎಸ್.ಕೆ.ಎಸ್.ಎಮ್ ಪ್ರಕಟಿತ ಕುರ್‌ಆನ್ ಅನುವಾದದಲ್ಲಿ ಈ ವಿಷಯವನ್ನು ಇಷ್ಟು ಸ್ಪಷ್ಟವಾಗಿ ಪ್ರಕಟಿಸಿರುವಾಗ ಇದರ ಮೇಲೆ ವಿಶ್ವಾಸವಿಲ್ಲದವರು ಎಸ್.ಕೆ.ಎಸ್. ಎಮ್‌ನೊಂದಿಗೆ ಐಕ್ಯಗೊಳ್ಳಲು ಸಾಧ್ಯವೇ. ಆದ್ದರಿಂದ ನಮ್ಮ ಐಕ್ಯವು ಕುರ್‌ಆನ್ ಮತ್ತು ಸುನ್ನತ್‌ನ ಆಧಾರಿತ ಎಂಬುದು ಇಲ್ಲಿ ಸ್ಪಷ್ಟ.

## ಸಂಗೀತ

ಇಸ್ಲಾಮಿನಲ್ಲಿ ಸಂಗೀತ(ಮ್ಯೂಸಿಕ್) ನಿಷಿದ್ಧವಾಗಿದೆ. ಇದುವೇ ಎಸ್.ಕೆ.ಎಸ್. ಎಮ್‌ನ ಅಧಿಕೃತ ವಿಶ್ವಾಸ. ಈ ವಿಷಯದಲ್ಲಿ ಯಾರಿಗಾದರೂ ವೈಯುಕ್ತಿಕ ಅಭಿಪ್ರಾಯವಿದ್ದರೆ ಅದಕ್ಕೆ ಎಸ್.ಕೆ.ಎಸ್.ಎಮ್ ಮತ್ತು ಕೆ.ಎನ್.ಎಮ್ ಹೊಣೆಯಲ್ಲ. ಆದರೆ ಸಂಗೀತರಹಿತವಾದ ಇಸ್ಲಾಮೀ ಹಾಡುಗಳನ್ನು ಹಾಡಬಹುದಾಗಿದೆ. ಸ್ವಹಾಬಿ ಮಹಿಳೆಯರು ಈದ್‌ನ ದಿನಗಳಲ್ಲಿ ಹಾಡಿರುವುದು ಸ್ಥಿರಪಟ್ಟಿದೆ.

ಅಲ್ಲಾಹನು ಸೂರತು ಲುಕ್ಮಾನ್‌ನಲ್ಲಿ ಹೇಳುತ್ತಾನೆ:

وَمِنَ ٱلنَّاسِ مَن يَشۡتَرِي لَهۡوَ ٱلۡحَدِيثِ لِيُضِلَّ عَن سَبِيلِ ٱللَّهِ بِغَيۡرِ
عِلۡمٖ وَيَتَّخِذَهَا هُزُوًاۚ أُوْلَٰٓئِكَ لَهُمۡ عَذَابٞ مُّهِينٞ 

"ಮತ್ತು ಜನರಲ್ಲಿ ಕೆಲವರಿದ್ದಾರೆ, ಅವರು ಯಾವ ತಿಳುವಳಿಕೆಯೂ ಇಲ್ಲದೆ ಅಲ್ಲಾಹನ ಮಾರ್ಗದಿಂದ (ಜನರನ್ನು) ದಾರಿಗೆಡಿಸಲಿಕ್ಕಾಗಿ ಮತ್ತು ಅದನ್ನು ತಮಾಷೆಯನ್ನಾಗಿ ಮಾಡಿಬಿಡಲಿಕ್ಕಾಗಿ ವಿನೋದದ ಮಾತುಗಳನ್ನು ಖರೀದಿಸುತ್ತಾರೆ. ಅಂತಹವರಿಗೆ ಅಪಮಾನಕರ ಶಿಕ್ಷೆಯಿದೆ."(ಲುಕ್ಮಾನ್: 6)

ಈ ಆಯತಿನಲ್ಲಿರುವ لَهْوَ ٱلْحَدِيثِ (ವಿನೋದದ ಮಾತ)ನ್ನು ವ್ಯಾಖ್ಯಾನಿಸುತ್ತಾ ಕುರ್‌ಆನ್ ತಫ್ಸೀರ್ ಗ್ರಂಥಗಳಲ್ಲಿ ಹೀಗಿದೆ:
(لَهْوَ الْحَدِيثِ: الغناء) "ಇಲ್ಲಿ 'ಲಹ್‌ವಲ್ ಹದೀಸ್'(ವಿನೋದದ ಮಾತು) ಎಂದರೆ ಸಂಗೀತೋಪಕರಣಗಳಾಗಿವೆ ಎಂದು ಇಬ್ನ್ ಮಸ್‌ಊದ್(ﷺ), ಇಬ್ನ್ ಅಬ್ಬಾಸ್(ﷺ) ಮತ್ತಿತರರು ಅಭಿಪ್ರಾಯಪಟ್ಟಿದ್ದಾರೆ"(ತಫ್ಸೀರ್ ಕುರ್ತುಬಿ, ಇಬ್ನ್ ಕಸೀರ್)

## ರುಕಿಯ್ಯಾ ಶರಇಯ್ಯಾ(ದುಆದ ಮೂಲಕ ಮಾಡುವ ಚಿಕಿತ್ಸೆ)

ರುಕಿಯ್ಯಾ ಶರಇಯ್ಯಾದ ವಿಷಯದಲ್ಲಿ ಪ್ರಮಾಣಗಳಲ್ಲಿ ಸ್ವಹೀಹ್ ಆಗಿ ಬಂದಿರುವ ಯಾವುದನ್ನೂ ತಿರಸ್ಕರಿಸದೆ ಎಲ್ಲವನ್ನೂ ಒಪ್ಪುತ್ತೇವೆ. ಉದಾ: ರೋಗಿಯನ್ನು ಸಂದರ್ಶಿಸುವಾಗ ಹೇಳಬೇಕಾದ ದುಆ, ರೋಗಿಯ ನೋವಿರುವ ಸ್ಥಳಕ್ಕೆ ಕೈಯಿಟ್ಟು ಮಂತ್ರಿಸಬೇಕಾದ ದುಆ, ರೋಗಿ ಸ್ವತಃ ನೋವಿರುವ ಸ್ಥಳಕ್ಕೆ ಕೈಯಿಟ್ಟು ಮಂತ್ರಿಸಬೇಕಾದ ದುಆ ಇತ್ಯಾದಿ. ಆದರೆ ಒದ್ದು, ಹೊಡೆದು ಜಿನ್ನ್ ಬಿಡಿಸುವುದು, ನೀರು ಸ್ಪ್ರೇ ಮಾಡಿ ಜಿನ್ನ್ ಬಿಡಿಸುವುದು, ಇಯರ್ ಫೋನ್‌ನಲ್ಲಿ ಕುರ್‌ಆನ್ ಕೇಳಿಸಿ ಜಿನ್ನ್ ಬಿಡಿಸುವುದು, ಮಸೀದಿ ಪಕ್ಕದಲ್ಲಿ ಮತ್ತು ಇತರ ಸ್ಥಳಗಳಲ್ಲಿ ಜಿನ್ನ್ ಚಿಕಿತ್ಸಾ ಕೇಂದ್ರಗಳನ್ನು ತರೆಯುವುದು ಇತ್ಯಾದಿಗಳು ಪ್ರಮಾಣಗಳಿಗೆ ವಿರುದ್ಧವಾಗಿರುವುದರಿಂದ ನಾವು ಅವುಗಳನ್ನು ವಿರೋಧಿಸುತ್ತೇವೆ.

ಮೇಲೆ ಪ್ರಸ್ತಾಪಿಸಲಾದ ಎಲ್ಲ ವಿಷಯಗಳನ್ನು ಕೆ.ಎನ್.ಎಮ್, ಎಸ್.ಕೆ.ಎಸ್.ಎಮ್‌ನವರು ಒಪ್ಪುತ್ತಿರುವಾಗ ಅವುಗಳನ್ನು ಒಪ್ಪದ ಒಂದು ವಿಭಾಗವು ಅವರೊಂದಿಗೆ ಐಕ್ಯಗೊಳ್ಳುವರೇ ? ಖಂಡಿತ ಇಲ್ಲ. ಆದ್ದರಿಂದ ಇವುಗಳೆಲ್ಲವನ್ನೂ ಒಪ್ಪುತ್ತಾ ಪರಸ್ಪರ ಐಕ್ಯಗೊಂಡಿದ್ದೇವೆ. ಒಂದು ವೇಳೆ ಅವರು ಒಪ್ಪುತ್ತಿಲ್ಲವಾದರೆ ಎಸ್.ಕೆ.ಎಸ್.ಎಮ್‌ನವರಿಗೆ ಈ ಕರಪತ್ರವನ್ನು ಬಿಡುಗಡೆಗೊಳಿಸಲು ಸಾಧ್ಯವಿತ್ತೇ ? ಆದ್ದರಿಂದ ಕುರ್‌ಆನ್ ಮತ್ತು ಹದೀಸ್‌ನ ಆಧಾರಿತವಾಗಿ ಐಕ್ಯಗೊಂಡಿದ್ದೇವೆಯೇ ಹೊರತು ಲೌಕಿಕ ವಿಷಯಕ್ಕಾಗಿಯಲ್ಲ ಎಂಬುದು ಇಲ್ಲಿ ಸ್ಪಷ್ಟ.

ಇನ್ನು ಹದೀಸ್‌ಗಳನ್ನು ಪೂರ್ಣವಾಗಿ ನಿಷೇಧಿಸುವ ಮುಂಕರೇನ್ ಹದೀಸ್ (ಅಹ್ಲೇ ಕುರ್‌ಆನ್?)ನವರೊಂದಿಗೆ ಹದೀಸನ್ನು ಪೂರ್ಣವಾಗಿ ಸ್ವೀಕರಿಸುವ ಕೆ.ಎನ್.ಎಮ್ ಮತ್ತು ಎಸ್.ಕೆ.ಎಸ್.ಎಮ್‌ನ್ನು ಸೇರಿಸುವ ಮೂಲಕ ಅತಿ ಹೀನವಾದ ಕೆಲಸಕ್ಕೆ ಕೆಲವರು ಇಳಿದಿದ್ದಾರೆ. ಈ ಮುಂಕರೇನ್ ಹದೀಸ್‌ನ ವಿಭಾಗದವರಿಗೂ ಎಸ್.ಕೆ.ಎಸ್.ಎಮ್, ಕೆ.ಎನ್.ಎಮ್‌ಗೂ ಯಾವುದೇ ಸಂಬಂಧವಿಲ್ಲ. ನಾವು ಸ್ವಹೀಹಾದ ಯಾವುದೇ ಹದೀಸನ್ನು ನಿಷೇಧಿಸುವುದಿಲ್ಲ. ಹಾಗೆಯೇ ದುರ್ಬಲವಾದ ಯಾವುದೇ ಹದೀಸನ್ನು ಸ್ವೀಕರಿಸುವುದೂ ಇಲ್ಲ.

ಇಸ್ಲಾಮಿನ ಪ್ರಮಾಣಗಳು ನಾಲ್ಕು.(الأدلة الأربعة). ಪವಿತ್ರ ಕುರ್‌ಆನ್, ಸ್ವಹೀಹಾದ ಹದೀಸ್, ಇಜ್ಮಾಅ್, ವ್ಯಕ್ತವಾದ ಕಿಯಾಸ್. ಈ ನಾಲ್ಕು ಪ್ರಮಾಣಗಳ ಮೂಲಕ ಬಂದವುಗಳು ಮಾತ್ರವೇ ಇಸ್ಲಾಮಿನ ವಿಶ್ವಾಸಾಚಾರಗಳು. ಇತರ ಕಾಲ–ಕೀಲಗಳಿಗೆ ಇಸ್ಲಾಮಿನಲ್ಲಿ ಯಾವುದೇ ಸ್ಥಾನ ಕಲ್ಪಿಸಲಾಗುವುದಿಲ್ಲ. ಈ ಪ್ರಮಾಣಗಳ

ಮೂಲಕ ಬಂದವುಗಳಲ್ಲಿ ಯಾವುದನ್ನೂ ನಾವು ತಿರಸ್ಕರಿಸಬಾರದು. ಅವುಗಳು ನಮ್ಮ ಮನಸ್ಸಿಗೆ ಹಿಡಿಸಿದರೂ ಹಿಡಿಸದಿದ್ದರೂ ಸರಿಯೆ ಅವುಗಳನ್ನು ನಾವು ಸ್ವೀಕರಿಸಲೇಬೇಕು. ಈ ನಾಲ್ಕು ಪ್ರಮಾಣಗಳಲ್ಲಿ ಇಲ್ಲದ ಹಲವು ತರದ ನವೀನಾಚಾರಗಳು ನಮ್ಮ ಸಮುದಾಯದಲ್ಲಿ ನೆಲೆಯೂರಿದೆ. ಉದಾ: ಅಲ್ಲಾಹೇತರರಾದ ಔಲಿಯಾ, ಅಂಬಿಯಾ, ಪುಣ್ಯ ಪುರುಷ, ಜಿನ್ನ್, ಮಲಕ್ ಮುಂತಾದವರೊಂದಿಗೆ ಪ್ರಾರ್ಥಿಸುವುದು ಮತ್ತು ಸಹಾಯ ಯಾಚಿಸುವುದು, ಜಿನ್ನ್ ಬಿಡಿಸುವ ನೆಪವೊಡ್ಡಿ ಒದ್ದು ಹೊಡೆದು ವಿವಿಧ ತರದ ಕ್ರೂರ ಕೃತ್ಯವನ್ನು ಮಾಡುವುದು ಇವುಗಳೆಲ್ಲವೂ ನಾಲ್ಕು ಪ್ರಮಾಣಗಳಲ್ಲಿ ಇಲ್ಲದ ನವೀನಾಚಾರಗಳಾಗಿವೆ. ಆದ್ದರಿಂದ ಅವುಗಳನ್ನು ಕೈಬಿಟ್ಟು ಪ್ರಮಾಣಗಳಲ್ಲಿ ಸ್ಥಿರಪಟ್ಟಿರುವ ವಿಶ್ವಾಸಾಚಾರಗಳ ಕಡೆಗೆ ಮರಳಿ ಜೀವಿಸಿದರೆ ಮಾತ್ರ ಸ್ವರ್ಗ ಪ್ರವೇಶಿಸಲು ಸಾಧ್ಯ.

ಸತ್ಯವಿಶ್ವಾಸಿಗಳೇ, ಅಪಪ್ರಚಾರಗಳನ್ನು ಹರಡಿ ಜನರನ್ನು ದಾರಿ ತಪ್ಪಿಸುವ ಫಿತ್ನಕೋರರ ಸುಳ್ಳಾರೋಪಗಳಿಗೆ ಕಿವಿಗೊಡದೆ ವಾಸ್ತವವನ್ನು ಅರಿಯಬೇಕಾಗಿ ವಿನಂತಿ. ಅಲ್ಲಾಹನು ಹೇಳುತ್ತಾನೆ:

وَٱلَّذِينَ يُؤْذُونَ ٱلْمُؤْمِنِينَ وَٱلْمُؤْمِنَٰتِ بِغَيْرِ مَا ٱكْتَسَبُوا۟ فَقَدِ ٱحْتَمَلُوا۟ بُهْتَٰنًا وَإِثْمًا مُّبِينًا ﴿٥٨﴾

"ಸತ್ಯವಿಶ್ವಾಸಿಗಳನ್ನು ಮತ್ತು ಸತ್ಯವಿಶ್ವಾಸಿನಿಯರನ್ನು ಅವರು ಮಾಡದಿರುವುದರ ಹೆಸರಲ್ಲಿ ಪೀಡಿಸುವವರು ಅಪರಾಧ ಮತ್ತು ಸ್ಪಷ್ಟ ಪಾಪವನ್ನು ಹೊತ್ತುಕೊಂಡರು." (ಅಲ್‌ಅಹ್ಝಾಬ್: 58)

ನಮ್ಮ ಮೇಲೆ ಇವರು ಹದೀಸ್ ನಿಷೇಧದ ಆರೋಪ ಏಕೆ ಹಾಕುತ್ತಾರೆಂದರೆ ಇವರಿಗೆ ಜಿನ್ನ್ ವಿಷಯದಲ್ಲಿ ಹಲವು ವಿಧಧ ವಾದಗಳಿವೆ. ಹಯ್ಯ್, ಹಾದಿರ್, ಕಾದಿರ್ ಆದ ಜಿನ್ನ್‌ನೊಂದಿಗೆ ಲೌಕಿಕ ಸಹಾಯವು ಶಿರ್ಕಲ್ಲ. ಹರಾಮ್ ಮಾತ್ರವಾಗಿದೆ, ಜಿನ್ನ್ ಸಹಾಯವು ವಸೀಲತು ಶಿರ್ಕ್ ಆಗಿದೆ. ಇನ್ನು ಕೆಲವರು ಮುಸ್ಲಿಮ್ ಜಿನ್ನ್‌ನೊಂದಿಗೆ ಸಹಾಯ ಯಾಚನೆ ವಸೀಲತು ಶಿರ್ಕ್, ಕಾಫಿರಾದರೆ ಶಿರ್ಕಾಗಿದೆ ಎಂದು ಹೇಳತ್ತಾ ಸತ್ಯವಿಶ್ವಾಸಿಗಳಾದ ಸಲಫಿಗಳಲ್ಲಿ ಶಿರ್ಕ್ ಕಲಬೆರಕೆ ಮಾಡಿ ಗೊಂದಲದಲ್ಲಿ ಹಾಕಿರುತ್ತಾರೆ. ಕೆ.ಎನ್.ಎಮ್, ಎಸ್.ಕೆ.ಎಸ್.ಎಮ್‌ನ ಮೇಲೆ ಹದೀಸ್ ನಿಷೇಧದ ಆರೋಪ ಮಾಡುವುದು ಜನರನ್ನು ಈ ತೌಹೀದೀ ಸಂಘಟನೆಯ ಮೇಲೆ ತಿರುಗಿ ಬೀಳುವಂತೆ ಮಾಡುವುದಕ್ಕಾಗಿದೆ. ಸತ್ಯವಿಶ್ವಾಸಿಗಳು ಇಂತಹ ಆಪತ್ತು ಜಾಲಗಳಿಗೆ ಮತ್ತು ನೂತನ ಆಶಯಕ್ಕೆ ಬಲಿ ಬೀಳದೆ ಸತ್ಯವನ್ನು ಮನಗಾಣಬೇಕಾಗಿ ವಿನಂತಿಸುತ್ತೇವೆ.

ಅಲ್ಲಾಹನು ನಮಗೆಲ್ಲರಿಗೂ ಸತ್ಯವನ್ನು ಅರಿತು ಅದರೊಂದಿಗೆ ಕೈಜೋಡಿಸಲು ತೌಫೀಕ್ ನೀಡಿ ಅನುಗ್ರಹಿಸಲಿ. ಆಮೀನ್.

**Publishers:**

**SKSM(R) Mangaluru**